ಾಲೆ

ಂಯ

. ಎಸ್.

ನಾಲಯ

**ರು**

*ಶ್ರೀಯುತರಾದ*

ಹಾ. ಮಾ. ನಾಯಕ

ಎಚ್. ನರಸಿಂಹಯ್ಯ

ಜಿ. ನಾರಾಯಣ

ಎಲ್. ಎಸ್. ಶೇಷಗಿರಿರಾವ್

ಶಾಂತರಸ

ಕೆ. ವಿ. ಸುಬ್ಬಣ್ಣ

ಗೊ. ರು. ಚನ್ನಬಸಪ್ಪ

ಪಿ. ಎಸ್. ಶಂಕರ್

ಶಿವಶಂಕರ ಹಿರೇಮಠ

ಆರ್. ಎಸ್. ರಾಜಾರಾಮ್

ಶ್ರೀಮತಿ ಎಲ್. ಜಿ. ಸುಮಿತ್ರ

**ಸಂಪಾದಕ ಸಮಿತಿ**

*ಶ್ರೀಯುತರಾದ*

ಎಸ್. ಜಿ. ನಾಗಲೋಟಿಮಠ

ಕೆ. ವಿ. ನಾರಾಯಣ

ಪುರುಷೋತ್ತಮ ಬಿಳಿಮಲೆ

ಕರೀಗೌಡ ಬೀಚನಹಳ್ಳಿ

ಅಮೃತ ಸೋಮೇಶ್ವರ

ಸಿ. ಆರ್. ಚಂದ್ರಶೇಖರ್

ಬಿ. ಎ. ಶ್ರೀಧರ

ಲಿಂಗದೇವರು ಹಳೆಮನೆ

ಭ. ಮಲ್ಲಿಕಾರ್ಜುನ

ಮಹಾಬಲೇಶ್ವರರಾವ್

ಭಕ್ತಪ್ರಿಯ

ಎಂ. ಪಿ. ಪರಮಶೇಖರಯ್ಯ

ಶ್ರೀಮತಿ ಉಷಾ ರಾಂಕುಮಾರ್

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ – ೧೦೦

# ನಸಿರುದ್ದೀನನ ಕತೆಗಳು

ಪ್ರಕಾಶ್ ಕಂಬತ್ತಳ್ಳಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ–೫೮೩ ೨೧೧

NASIRUDEENANA KATHEGALU : By Prakash Kambathalli. Published by The Director of Prasaranga, Kannada University, Hampi - 583 211, KARNATAKA.
First Impression 1994, Pp.ii + 26, Rs. 8.00.

---



ಸಂಯೋಜನಾಧಿಕಾರಿ
ಡಾ.ಎಚ್.ಎಸ್.ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

ಪ್ರಕಾಶಕರು
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ — ೫೮೩ ೨೧೧

ಮುಖಪುಟ ವಿನ್ಯಾಸ
ಕೆ.ಮಕಾಳಿ

ಬೆಲೆ : ರೂ. ೮.೦೦

ಮುದ್ರಕರು
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
೧೨/೧೩, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು — ೫೬೦ ೦೦೪.




# ನಸಿರುದ್ದೀನನ ಕತೆಗಳು

ನಸಿರುದ್ದೀನನದು ವರ್ಣರಂಜಿತ ವ್ಯಕ್ತಿತ್ವ. ನಮ್ಮಲ್ಲಿ, ತೆನಾಲಿರಾಮನ ಕತೆಗಳು, ಬೀರ್‌ಬಲ್‌ನ ಕತೆಗಳು ಪ್ರಸಿದ್ಧವಾಗಿರುವಂತೆ ನಸಿರುದ್ದೀನನ ಕತೆಗಳೂ ಪ್ರಸಿದ್ಧವಾಗಿವೆ. ಈತ ಒಬ್ಬ ಸಾಮಾನ್ಯ ಜೀವಿಯಾಗಿದ್ದ. ಬಡವರ ಪಕ್ಷಪಾತಿಯಾಗಿದ್ದ. ದಾರ್ಶನಿಕ ಮತ್ತು ಪಂಡಿತನಾಗಿದ್ದ. ತನ್ನ ಕಾಲದ ಸಮಾಜವನ್ನು ಒರೆಗೆ ಹಚ್ಚಿ, ಅದನ್ನು ತಿದ್ದುವ ಕೆಲಸದಲ್ಲಿ ಹಿಂದೆ ಮುಂದೆ ನೋಡುತ್ತಿರಲಿಲ್ಲ. ತಪ್ಪು ಯಾರು ಮಾಡಿದ್ದರೂ ಸರಿ, ಖಂಡಿಸದೆ ಬಿಡುತ್ತಿರಲಿಲ್ಲ.

ನಸಿರುದ್ದೀನನ ಕತೆಗಳಲ್ಲಿ ಬಹುಮಟ್ಟಿಗೆ ಪ್ರಧಾನ ಪಾತ್ರಧಾರಿ ಆತನೇ.ಇವನ ಕತೆಗಳನ್ನು ನೀತಿಕತೆಗಳು, ಹಾಸ್ಯಕತೆಗಳು ಎಂದು ವಿಂಗಡಿಸಲಾಗುವುದಿಲ್ಲ. ಎಲ್ಲವೂ ವಿಶ್ರಣವಾದ ಒಂದು ಇಡೀ ಉಂಡೆಯಿದ್ದಂತೆ. ನಸಿರುದ್ದೀನನ ಕತೆಗಳ ಮತ್ತೊಂದು ವೈಶಿಷ್ಟವೆಂದರೆ

ಕತೆಗಳ ಗಾತ್ರ. ಯಾವೊಂದು ಕತೆಯೂ ಒಂದು ಪುಟ ಮೀರುವುದಿಲ್ಲ. ಚುಟುಕಾಗಿದ್ದು ಒಮ್ಮೆ ಓದಲು ಪ್ರಾರಂಭಿಸಿದರೆ ಮುಗಿಯುವವರೆಗೆ ಕೆಳಗಿಡಲಾಗದಷ್ಟು ಆಕರ್ಷಣೆ ಹೊಂದಿರುತ್ತವೆ.

ನಸಿರುದ್ದೀನನಿಗೆ ಕತ್ತೆಯನ್ನು ಕಂಡರೆ ಬಹಳ ಪ್ರೀತಿಯಿದ್ದಂತೆ ಕಾಣುತ್ತದೆ. ಅವನ ಬಹುತೇಕ ಕತೆಗಳಲ್ಲಿ ಕತ್ತೆ ಒಂದು ಪ್ರಧಾನ ಪಾತ್ರವಾಗಿ ಕಂಡುಬರುತ್ತದೆ.

ಕತೆಗಳನ್ನು ಓದಿದ ಮೇಲೆ, ಬೀರ್‌ಬಲ್, ತೆನಾಲಿ ರಾಮನಂತೆ ನಸಿರುದ್ದೀನ್ ಒಬ್ಬ ಸಭ್ಯ ವ್ಯಕ್ತಿಯಂತೇನೂ ನಮಗೆ ಕಂಡು ಬರುವುದಿಲ್ಲ. ಏಕೆಂದರೆ, ತನ್ನ ಬಡತನ ನಿವಾರಣೆಗೊಸ್ಕರ ನಸಿರುದ್ದೀನ್ ಏನೇನೋ ಮೋಸದ ಕೆಲಸಗಳನ್ನು ಮಾಡುತ್ತಾನೆ. ಕಳ್ಳಸಾಗಾಣಿಕೆ ಮಾಡುತ್ತಾನೆ. ನ್ಯಾಯಾಲಯಕ್ಕೆ ಹೋಗುತ್ತಾನೆ. ಜೊತೆಗೆ ಸಾರ್ವಜನಿಕ ಚಟುವಟಿಕೆಗಳಲ್ಲೂ ತೊಡಗಿಕೊಂಡಿರುತ್ತಾನೆ. ಒಬ್ಬ ಸಾಧಾರಣ ವ್ಯಕ್ತಿಯಲ್ಲಿನ ಗುಣದೋಷಗಳೆಲ್ಲವನ್ನೂ ಈತ ಒಳಗೊಂಡಿದ್ದಾನೆ. ಆದ್ದರಿಂದಲೇ ನಸಿರುದ್ದೀನ್ ನಮಗೆ ಪ್ರಿಯನಾಗುತ್ತಾನೆ.

ಇಷ್ಟೆಲ್ಲಾ ಆದಮೇಲೆ ನಸಿರುದ್ದೀನನ ಕತೆಗಳು ನಿಜವಾಗಿ ನಡೆದವುಗಳೇ ಅಥವಾ ಕಾಲಕಾಲಕ್ಕೆ ಜನ ತಮ್ಮ ಬದುಕಿನಲ್ಲಿ ನಡೆದ ಸ್ವಾರಸ್ಯಕರ ಘಟನೆಗಳನ್ನು ಬರೆದು ನಸಿರುದ್ದೀನನ ಹೆಸರಿನಲ್ಲಿ ಸೇರಿಸಿದ್ದಾರೆಯೇ ಎಂಬ ಅನುಮಾನಗಳುಂಟಾಗುತ್ತವೆ. ಇಂತಹ ವಿಷಯಗಳ ಬಗ್ಗೆ ತಲೆ ಕೆಡಿಸಿಕೊಳ್ಳದೆ, ಕತೆಗಳನ್ನು ಓದಿ ಅವುಗಳ

ಸ್ವಾರಸ್ಯವನ್ನು ಸವಿಯುವುದು ಮೇಲು. ಕೆಲವು ಆಯ್ದ ನಸಿರುದ್ದೀನ ಕತೆಗಳು ಹೀಗಿವೆ:

## ೧. ದೊಪ್!

ರಾತ್ರಿ ಇದ್ದಕ್ಕಿದ್ದಂತೆ 'ದೊಪ್' ಎಂದು ಸದ್ದಾದುದನ್ನು ಕೇಳಿ ನಸಿರುದ್ದೀನನ ಹೆಂಡತಿಗೆ ಎಚ್ಚರವಾಯಿತು. ಗಡಬಡಿಸಿ ಏಳುತ್ತಾ 'ಏನದು ಸದ್ದು' ಎಂದು ನಸಿರುದ್ದೀನನನ್ನು ಕತ್ತಲಲ್ಲಿಯೇ ಕೇಳಿದಳು.

"ಏನಿಲ್ಲ ಮಲಗಿಕೋ, ನನ್ನ ನಿಲುವಂಗಿ ಕೆಳಗೆ ಬಿತ್ತು ಅಷ್ಟೇ" ಎಂದ ನಸಿರುದ್ದೀನ್.

"ನಿಲುವಂಗಿ ಬಿದ್ದರೆ ಅಷ್ಟು ದೊಡ್ಡ ಸದ್ದಾಗುತ್ತದೆಯೇ?" ಎಂದಳು ಹೆಂಡತಿ.

"ನಿಲುವಂಗಿಯೊಳಗೆ ನಾನಿದ್ದೆ"ಎಂದ ನಸಿರುದ್ದೀನ್.

## ೨. ಕತ್ತೆಯ ಮಾತು

ನಸಿರುದ್ದೀನನ ಬಳಿ ಒಂದು ಸುಂದರವಾದ ಕತ್ತೆ ಇತ್ತು. ಅವನು ಅದನ್ನು ಯಾರಿಗೂ ಕೊಡಲು ಇಷ್ಟ ಪಡುತ್ತಿರಲಿಲ್ಲ. ಆದರೂ ಒಂದು ದಿನ ನೆರೆಯವ ಬಂದು ಕೇಳಿದ.

"ಕೆಲವು ಸಾಮಾನು ಸಾಗಿಸಬೇಕಾಗಿದೆ. ನಿನ್ನ ಕತ್ತೆ ಕೊಡುವೆಯಾ?"



"ಇಲ್ಲ ಮಿತ್ರ. ಈಗ ನನ್ನ ಬಳಿ ಯಾವ ಕತ್ತೆಯೂ ಇಲ್ಲ"ಎಂದ ನಸಿರುದ್ದೀನ್.

ಪರಿಪರಿಯಾಗಿ ಕೇಳಿಕೊಂಡರೂ ನಸಿರುದ್ದೀನ್ ತನ್ನ ಬಳಿ ಕತ್ತೆ ಇಲ್ಲ ಎಂದೇ ವಾದಿಸಿದ. ಮಿತ್ರ ಇನ್ನೇನು ಹೊರಡಬೇಕು, ಅಷ್ಟರಲ್ಲಿ ಮನೆಯಲ್ಲಿದ್ದ ಕತ್ತೆ ಜೋರಾಗಿ ಅರಚಿಕೊಂಡಿತು.

ನೆರೆಮನೆಯಾತ "ಏನು ದೊಡ್ಡಮನುಷ್ಯರೇ, ಕತ್ತೆ ನಾನಿಲ್ಲಿದ್ದೇನೆ ಅಂತ ಕೂಗಿ ಹೇಳುತ್ತಿದೆಯಲ್ಲಾ" ಎಂದ ವ್ಯಂಗ್ಯವಾಗಿ.

ನಸಿರುದ್ದೀನನಿಗೆ ಕೋಪ ಉಕ್ಕಿ ಬಂತು. "ಅಲ್ಲಯ್ಯ ಇಷ್ಟು ದೊಡ್ಡ ಮನುಷ್ಯ, ನಾನು ಹೇಳುವ ಮಾತಿಗಿಂತ ನಿನಗೆ ಕತ್ತೆಯ ಮಾತಿನಲ್ಲಿ ನಂಬಿಕೆ ಹೆಚ್ಚೋ" ಎಂದು ಕೇಳಿದ.

## ೩. ಬೆವರು

ಜಿಪುಣ ವರ್ತಕನೊಬ್ಬನ ಹೆಂಡತಿ ಒಂದು ದಿನ ಆತಂಕದಿಂದ ನಸಿರುದ್ದೀನನ ಮನೆಗೆ ಬಂದು ಕೇಳಿದಳು."ನನ್ನ ಗಂಡನಿಗೆ ಮೂರು ದಿನಗಳಿಂದ ವಿಪರೀತ ಜ್ವರ. ಆದರೂ ಬೆವರು ಇಳಿಯುತ್ತಿಲ್ಲ. ಏನು ಮಾಡಲಿ?"

ಅದಕ್ಕೆ ನಸಿರುದ್ದೀನ್ ಹೇಳಿದ. "ನೀನೇನೂ ಚಿಂತೆ ಮಾಡಬೇಡಮ್ಮಾ. ನಿನ್ನ ಗಂಡನ ಸ್ವಭಾವ ನನಗೆ ಚೆನ್ನಾಗಿ ಗೊತ್ತು. ಮನೆಯಲ್ಲಿರುವ ಹಣದ ಥೈಲಿಯನ್ನು ನಿನ್ನ ಗಂಡನಿಗೆ ಕಾಣುವಂತೆ ಕೈಯಲ್ಲಿ ಹಿಡಿದು, ಔಷಧಿ ತರುತ್ತೇನೆ ಎಂದು ಮನೆಯಿಂದ ಹೊರಡುವಂತೆ ನಟಿಸು. ನಿನ್ನ ಗಂಡನಿಗೆ ಕೂಡಲೇ ಬೆವರು ಕಾಣಿಸಿಕೊಳ್ಳುತ್ತದೆ."

## ೪. ನಸಿರುದ್ದೀನನ ನಾಯಿ

ನಸಿರುದ್ದೀನನ ಊರಿನಲ್ಲಿ ಒಬ್ಬ ಅಧಿಕಾರಿ ಇದ್ದ. ಅವನು ತುಂಬಾ ದರ್ಪಿಷ್ಟ, ಅಹಂಕಾರಿ, ನಿರ್ದಯಿ ಮತ್ತು ಭ್ರಷ್ಟನಾಗಿದ್ದ. ಊರಿನ ಜನ ಅವನ ನಡವಳಿಕೆಯಿಂದ ಬೇಸತ್ತು ಹೋಗಿದ್ದರು.

ಒಮ್ಮೆ ನಸಿರುದ್ದೀನ ತನ್ನ ಬಳಿ ಇದ್ದ ಸುಂದರವಾದ ನಾಯಿಯ ಜೊತೆ ಅಧಿಕಾರಿಯ ಮನೆ ಮುಂದೆ ಹೋಗುತ್ತಿದ್ದ. ನಾಯಿ ಅಧಿಕಾರಿಗೆ ಇಷ್ಟವಾಯಿತು.

"ನನಗೆ ಈ ನಾಯಿಯನ್ನು ಕೊಡು" ಎಂದು ನಸಿರುದ್ದೀನನನ್ನು ಅಧಿಕಾರಿ ಕೇಳಿದ.

"ಇದು ಬೇಡ. ಇನ್ನೂ ಚೆನ್ನಾಗಿರುವ ನಾಯಿ ನನ್ನ ಬಳಿ ಇದೆ. ಅದನ್ನು ನಾಳೆ ತಂದುಕೊಡುತ್ತೇನೆ" ಎಂದ ನಸಿರುದ್ದೀನ.

ಮಾರನೆ ದಿನ ನಾಯಿಯನ್ನು ತಂದುಕೊಟ್ಟ. ಆದರೆ ಆ ನಾಯಿ ನೋಡಲು ಚೆನ್ನಾಗಿತ್ತೇ ಹೊರತು, ಬೊಗಳುತ್ತಿರಲಿಲ್ಲ. ಕಚ್ಚುತ್ತಿರಲಿಲ್ಲ. ಯಾವಾಗಲೂ ಸುಮ್ಮನೆ ಮಲಗಿರುತ್ತಿತ್ತು.

ಇದನ್ನು ಕಂಡು ಅಧಿಕಾರಿ ನಸಿರುದ್ದೀನನನ್ನು ಕರೆ ಕಳುಹಿಸಿದ. ನಸಿರುದ್ದೀನ ಬಂದ ಕೂಡಲೇ ಅಧಿಕಾರಿ, ಕೋಪದಿಂದ "ಇದೇನು ನಾಯಿಯೋ ಅಥವಾ ನಾಯಿ ಬೊಂಬೆಯೋ" ಎಂದು ಕೇಳಿದ.

ಅದಕ್ಕೆ ನಸಿರುದ್ದೀನ "ಮಹಾನೀಯರೇ, ಸ್ವಲ್ಪ ದಿನ ತಾಳಿ. ನಾಯಿಗೆ ನಿಮ್ಮ ಗುಣ ಸ್ವಭಾವ ಪರಿಚಯ ಆಗಿಲ್ಲ. ಆದ ಮೇಲೆ ಅದು ಪ್ರಜೆಗಳನ್ನೂ ಕಂಡು ಬೊಗಳುತ್ತದೆ, ಕಚ್ಚುತ್ತದೆ. ನ್ಯಾಯ ಅನ್ಯಾಯ ಎಂದು ಭೇದ ಎಣಿಸದೆ ಎಲ್ಲರಿಂದ ಹಣ ಕಸಿಯುತ್ತದೆ. ಹಣ

ಕೊಟ್ಟವರಿಗೆ ಮೆತ್ತಗೆ ಬೊಗಳಿ ಕೃತಜ್ಞತೆ ಸೂಚಿಸುತ್ತದೆ. ಕೊಡದಿದ್ದರೆ ಮೈ ಮೇಲೆ ಹಾರಿ ಪರಚುತ್ತದೆ" ಎಂದು ಹೇಳಿ ಒಂದು ನಿಮಿಷವೂ ನಿಲ್ಲದೆ ಜಾಗ ಖಾಲಿ ಮಾಡಿದ.

## ೫. ಮೂರ್ಖ

ಒಮ್ಮೆ, ಒಬ್ಬ ಪಂಡಿತರಿಗೆ ಮನೆಗೆ ಬರುವಂತೆ ನಸಿರುದ್ದೀನ್ ಕರೆದ. ಆದರೆ ಅವರು ಬಂದಾಗ ಮನೆಯಲ್ಲಿ ಇರಲಾಗಲಿಲ್ಲ. ಅವರು ಕೋಪದಿಂದ "ಮೂರ್ಖ" ಎಂದು ಚೀಟಿ ಬರೆದಿರಿಸಿ ತೆರಳಿದರು.

ಮನೆಗೆ ಬಂದಾಗ ನಸಿರುದ್ದೀನನಿಗೆ ತನ್ನ ತಪ್ಪಿನ ಅರಿವಾಯಿತು. ಪಂಡಿತರಿಗೆ ಪತ್ರ ಬರೆದ. "ತಾವು ಬಂದಾಗ ಮನೆಯಲ್ಲಿ ಇರಲಾಗದುದಕ್ಕೆ ಕ್ಷಮಿಸಿ. ಚೀಟಿಯಲ್ಲಿ ತಾವು ಬರೆದಿದ್ದ ಹೆಸರು ನೋಡಿ ನೀವೇ ಬಂದಿರುವುದು ಎಂದು ತಿಳಿಯಿತು."

## ೬. ನಸಿರುದ್ದೀನ್ ಸಿಂಹಾಸನ ಏರಿದ್ದು

ಬಾದಶಹನಿಗೆ ಮತ್ತು ದರ್ಬಾರದವರಿಗೆ ನಸಿರುದ್ದೀನನ್ನು ಅವಮಾನಿಸಬೇಕೆಂದು ಅನ್ನಿಸಿತು.

ಬಾದಶಹ ಸಭೆ ಕರೆದ. "ಈ ದಿನ ನಾನು ನಸಿರುದ್ದೀನನನ್ನು ರಾಜ್ಯದ ಎಲ್ಲ ಕತ್ತೆಗಳ ಮಹಾಧಿಕಾರಿಯಾಗಿ ಎಂದು ನೇಮಿಸಿದ್ದೇನೆ" ಎಂದು ಹೇಳಿದ.



ದರ್ಬಾರದಲ್ಲಿದ್ದವರೆಲ್ಲ ಬಿದ್ದು ಬಿದ್ದು ನಕ್ಕರು. ನಸಿರುದ್ದೀನ್ ಸ್ವಲ್ಪವೂ ಕೋಪಗೊಳ್ಳಲಿಲ್ಲ. ಬಾದಶಹನಿಗೆ ವಂದಿಸಿ ನೇರವಾಗಿ ತೆರಳಿ ರಾಜನ ಸಿಂಹಾಸನದ ಮೇಲೆ ಕುಳಿತುಕೊಂಡ.

ಸಭೆಯಲ್ಲಿದ್ದವರು ಬೆರಗಾದರು.

"ಇದೇನು ಅಧಿಕ ಪ್ರಸಂಗತನ? ಕೂಡಲೇ ಕೆಳಗಿಳಿ" ಎಂದು ಬಾದಶಹ ಕೋಪದಿಂದ ಕೂಗಿದ.

ನಸಿರುದ್ದೀನ್ ಕದಲಲಿಲ್ಲ.

"ಸದ್ದು, ಸದ್ದು!ಯಾರೂ ಗದ್ದಲ ಮಾಡಬಾರದು. ನನ್ನೆದುರು ಕೂಗಾಡಲು ಯಾವ ಕತ್ತೆಗೂ ಅನುಮತಿಯಿಲ್ಲ.ಎಲ್ಲ ಕತ್ತೆಗಳೂ, "ಕತ್ತೆಗಳ ಮಹಾಧಿಕಾರಿ" ನಸಿರುದ್ದೀನನ ಕಟ್ಟಪ್ಪಣೆಯನ್ನು ಪಾಲಿಸಬೇಕು" ಎಂದು ನಸಿರುದ್ದೀನ್ ಆಜ್ಞೆ ಹೊರಡಿಸಿದ.

ಬಾದಶಹನೂ ಸೇರಿ ಆಸ್ಥಾನದವರೆಲ್ಲಾ ತಣ್ಣಗೆ ಕುಳಿತರು.

## ೭. ಶ್ರೀಮಂತನ ತಲೆ ಕಳ್ಳತನ

ಸಾರ್ವಜನಿಕ ಕೆಲಸಕ್ಕಾಗಿ ವಂತಿಗೆ ಸಂಗ್ರಹಿಸಬೇಕಾಗಿತ್ತು. ನಸಿರುದ್ದೀನನೇ ಅದರ ಮುಂದಾಳತ್ವ ವಹಿಸಿದ.



ಎಲ್ಲ ಕಡೆ ವಂತಿಗೆ ಸಂಗ್ರಹಿಸುತ್ತಾ, ಒಬ್ಬ ಭಾರಿ ಶ್ರೀಮಂತನ ಮನೆಗೆ ಬಂದ. ಬಾಗಿಲಲ್ಲಿದ್ದ ಸೇವಕನಿಗೆ ಹೇಳಿದ:

"ವಂತಿಗೆ ಸಂಗ್ರಹಕ್ಕಾಗಿ ಬಂದಿದ್ದೇನೆ. ಒಳಗೆ ಬಿಡು."

ಆದರೆ ಸೇವಕ ತಾನೇ ಒಳಗೆ ಹೋಗಿ, ಸ್ವಲ್ಪ ಹೊತ್ತಿನ ನಂತರ ಹೊರಗೆ ಬಂದು ಹೇಳಿದ;

"ಯಜಮಾನರು ಮನೆಯಲ್ಲಿಲ್ಲ"

ಹಾಗಾದರೆ ಒಂದು ಮಾತು ನಿಮ್ಮ ಯಜಮಾನರಿಗೆ ತಿಳಿಸು ಎಂದ ನಸಿರುದ್ದೀನ್.

'ಏನದು' ಎಂದು ಸೇವಕ ಕೇಳಿದ.

"ಇನ್ನು ಮುಂದೆ ನಿಮ್ಮ ಯಜಮಾನರು ಹೊರಗೆ ಹೋಗುವಾಗ ತಮ್ಮ ತಲೆಯನ್ನೂ ತೆಗೆದುಕೊಂಡು ಹೋಗುವಂತೆ ಹೇಳು. ಹೀಗೆ ತಲೆಯನ್ನು ಕಿಟಕಿಯಲ್ಲಿಟ್ಟು ಹೋದರೆ ಯಾರಾದರೂ ಕದ್ದು ಬಿಟ್ಟಾರು" ಎಂದ ನಸಿರುದ್ದೀನ್, ಮಹಡಿಯ ಮೇಲಿನ ಕಿಟಕಿಯಿಂದ ಇಣುಕುತ್ತಿದ್ದ ಮುಖವನ್ನು ನೋಡುತ್ತಾ.

## ೮. ವಯಸ್ಸು

ಒಂದು ದಿನ ಗೆಳೆಯರ ಗುಂಪಿನಲ್ಲಿ ನಸಿರುದ್ದೀನ್ ಹರಟೆ ಹೊಡೆಯುತ್ತಿದ್ದ. ಮಾತಿನ ಮಧ್ಯೆ ಸ್ನೇಹಿತನೊಬ್ಬ "ನಸಿರುದ್ದೀನ್ ನಿನ್ನ ವಯಸ್ಸೆಷ್ಟು?" ಎಂದು ಕೇಳಿದ.

ನಸಿರುದ್ದೀನ್ ಕೂಡಲೇ "ನಲವತ್ತು ವರ್ಷ" ಎಂದ.

ಆದರೆ ಅವನ ಸುಕ್ಕುಗಟ್ಟಿದ ಮುಖ ಬಿಳಿಯ ಕೂದಲು ನೋಡಿದರೆ ನಲವತ್ತು ವಯಸ್ಸಿನವನಂತೆ ಕಾಣುತ್ತಿರಲಿಲ್ಲ. ಆದ್ದರಿಂದ ಸ್ನೇಹಿತರು ಅವನ ಮಾತನ್ನು ನಂಬಲಿಲ್ಲ. ಅವರಲ್ಲಿ ಒಬ್ಬ ಧೈರ್ಯ ಮಾಡಿ ಕೇಳಿದ.

" ಅಲ್ಲಾ ನಸಿರುದ್ದೀನ್, ಹತ್ತು ವರ್ಷದ ಹಿಂದೆಯೂ ನೀನು ಇದೇ ಮಾತು ಹೇಳಿದ್ದು ನನಗೆ ಚೆನ್ನಾಗಿ ನೆನಪಿದೆ. ಈಗಲೂ ನಲವತ್ತು ವರ್ಷ ಎಂದೇ ಹೇಳುವಿಯಲ್ಲ?"

"ನಾನು ಆಗೊಂದು ಈಗೊಂದು ಮಾತನಾಡುವವನಲ್ಲ. ನನ್ನದು ಯಾವಾಗಲೂ ಒಂದೇ ಮಾತು" ಎಂದ ನಸಿರುದ್ದೀನ.

## ೯. ಸಂಗೀತ ಕಲಿಕೆ

ನಸಿರುದ್ದೀನನಿಗೆ ಸಂಗೀತ ಕಲಿಯಬೇಕೆಂದು ಆಸೆಯಾಯಿತು. ಒಬ್ಬ ಸಂಗೀತಗಾರನಲ್ಲಿಗೆ ಹೋಗಿ ತನ್ನ ಬಯಕೆ ತೋಡಿಕೊಂಡ. ಸಂಗೀತ ಕಲಿಸಲು ಒಪ್ಪಿದ ಸಂಗೀತಗಾರ ತನ್ನ ಶುಲ್ಕ ಹೆಚ್ಚು ಎಂದ.

'ಎಷ್ಟು' ಎಂದ ನಸಿರುದ್ದೀನ್.

"ಮೊದಲ ತಿಂಗಳಿಗೆ ನೂರು ದಿನಾರ್, ಎರಡನೆ ತಿಂಗಳಿಗೆ ಐವತ್ತು, ಮೂರನೆಯ ತಿಂಗಳಿಗೆ ಇಪ್ಪತ್ತೈದು, ನಾಲ್ಕನೆಯ ತಿಂಗಳಿಗೆ ಹದಿನೈದು, ಐದನೆಯ ತಿಂಗಳಿಗೆ ಹತ್ತು, ಆರನೆಯ ತಿಂಗಳಿಗೆ ಐದು ಮತ್ತು ಏಳನೆಯ ತಿಂಗಳಿನಿಂದ ಉಚಿತ " ಎಂದ ಸಂಗೀತಗಾರ.

"ಸರಿ, ಹಾಗಿದ್ದರೆ ನಾನು ಏಳನೆಯ ತಿಂಗಳಿನಿಂದಲೇ ಸಂಗೀತ ಕಲಿಯಲು ಬರುತ್ತೇನೆ" ಎಂದು ನಸಿರುದ್ದೀನ್ ಹೊರ ನಡೆದ.

## ೧೦. ಸುಂಕದ ಅಧಿಕಾರಿಗಳನ್ನು ಮೋಸಗೊಳಿಸಿದ್ದು

ಪ್ರತಿದಿನ ನಸಿರುದ್ದೀನ್ ಗಡಿಯಾಚೆಯಿಂದ ಕತ್ತೆಗಳ ಮೇಲೆ ಹುಲ್ಲನ್ನು ಹೇರಿಕೊಂಡು ಬರುತ್ತಿದ್ದ. ದಿನೇ ದಿನೇ ಶ್ರೀಮಂತನಾಗ ತೊಡಗಿದ. ಗಡಿಯಲ್ಲಿದ್ದ ಅಧಿಕಾರಿಗಳಿಗೆ ಅನುಮಾನ ಬಂತು.

ಒಮ್ಮೆ ಅವನ ಕತ್ತೆಗಳನ್ನು ತಡೆದು, ಹುಲ್ಲನ್ನು ಶೋಧಿಸಿದರು. ಏನೂ ಸಿಗಲಿಲ್ಲ. ಹೋಗಲು ಬಿಟ್ಟರು. ಆದರೂ ನಸಿರುದ್ದೀನನ ಶ್ರೀಮಂತಿಕೆ ಹೆಚ್ಚಿತು.

ಸುಂಕದ ಅಧಿಕಾರಿಗಳು ದಕ್ಷ ಅಧಿಕಾರಿಗಳಿಂದ ನಸಿರುದ್ದೀನನ ಕತ್ತೆಗಳ ಮೇಲಿದ್ದ ಹುಲ್ಲನ್ನು ಪರೀಕ್ಷಿಸಿದರು. ಆದರೂ ಏನೂ ಸಿಗಲಿಲ್ಲ.



ಕೊನೆಗೆ ಬೇಸತ್ತು ಹುಲ್ಲನ್ನು ತೆಗೆದಿರಿಸಿಕೊಂಡು ಕತ್ತೆಗಳನ್ನು ಮಾತ್ರ ಬಿಡತೊಡಗಿದರು.

ಮುಂದೆ ನಸಿರುದ್ದೀನ ಹುಲ್ಲು ತರುವುದನ್ನು ನಿಲ್ಲಿಸಿ ಆರಾಮವಾಗಿರತೊಡಗಿದ.



ಕೊನೆಗೆ, ನಿವೃತ್ತನಾಗಿದ್ದ ಸುಂಕದ ಅಧಿಕಾರಿಯೊಬ್ಬ "ನೀನು ಏನನ್ನು ಕಳ್ಳತನದಿಂದ ಸಾಗಿಸುತ್ತಿದ್ದೆ? ನಾವು ಹುಲ್ಲನ್ನೇ ತೆಗೆದಿರಿಸಿಕೊಂಡರೂ ನಿನ್ನ ಶ್ರೀಮಂತಿಕೆ ಹೇಗೆ ಬೆಳೆಯಿತು. ಈಗಲಾದರೂ ಹೇಳು" ಎಂದು ಕೇಳಿದ.

"ಅಯ್ಯೋ ಅಷ್ಟೂ ಗೊತ್ತಾಗಲಿಲ್ಲವೇ? ನಾನು ಆಚೆಯ ಗಡಿಯಿಂದ ಆ ಕತ್ತೆಗಳನ್ನೇ ಇಲ್ಲಿ ತಂದು ಮಾರಾಟ ಮಾಡುತ್ತಿದ್ದೆ. ಹುಲ್ಲು ಒಂದು ನೆಪ ಅಷ್ಟೇ. ಗಡಿಯಾಚೆಗಿನ ಕತ್ತೆಗಳಿಗೆ ಇಲ್ಲಿ ಬೇಡಿಕೆ ಹೆಚ್ಚು" ಎಂದ ನಸಿರುದ್ದೀನ್. ಅಧಿಕಾರಿ ಸುಸ್ತಾದ.

## ೧೧. ಪೈಲ್ವಾನ ಮತ್ತು ನಸಿರುದ್ದೀನ್

ಒಮ್ಮೆ ಒಬ್ಬ ಪೈಲ್ವಾನ ಊರವರ ಮುಂದೆಲ್ಲಾ ತನ್ನ ಶಕ್ತಿ ಸಾಮರ್ಥ್ಯ ಕುರಿತು ಜಂಬ ಕೊಚ್ಚಿಕೊಳ್ಳುತ್ತಿದ್ದ. ಬಂಡೆಯನ್ನು ಬೇಕಾದರೂ ಎತ್ತಿ ಎಸೆಯಬಲ್ಲೆ ಎಂದು ಪಂಥ ಕಟ್ಟುತ್ತಿದ್ದ. ಪೈಲ್ವಾನನ



ದಢೂತಿ ದೇಹವನ್ನು ನೋಡಿ ಜನರಾರೂ ಅವನ ತಂಟೆಗೆ ಹೋಗುತ್ತಿರಲಿಲ್ಲ.

ಆದರೆ ನಸಿರುದ್ದಿನನಿಗೆ ತಡೆಯಲಾಗಲಿಲ್ಲ. ಪೈಲ್ವಾನನನ್ನು ಕರೆದು ಹೇಳಿದ "ದೊಡ್ಡ ಬಂಡೆಗಲ್ಲು ಬೇಡಪ್ಪಾ, ಇದನ್ನು ನೋಡು. ಇದು ತುಂಬಾ ಹಗುರ. ಇದನ್ನು ಗೋಡೆಯಾಚೆ ಎಸೆ" ಎಂದು ತನ್ನ ಕರವಸ್ತ್ರವನ್ನು ನೀಡಿದ. "ಇದೇನು ಮಹಾ" ಎಂದು ಪೈಲ್ವಾನ ಕರವಸ್ತ್ರವನ್ನು ಬೀಸಿ ಎಸೆದ. ಆದರೆ ತುಸು ಎತ್ತರಕ್ಕೆ ಹೋಗಿ ಅದು ಕೆಳಗೆ ಬಿತ್ತು. ಅನೇಕ ಸಲ ಪ್ರಯತ್ನಿಸಿದರೂ ಕರವಸ್ತ್ರ ಎಸೆಯಲಾಗಲಿಲ್ಲ. ಪಕ್ಕದಲ್ಲಿ ನಿಂತು ಮುಸಿ ಮುಸಿ ನಗುತ್ತಿದ್ದ ನಸಿರುದ್ದೀನ್. "ನೀನೇನು ಮಹಾ ಬಲಶಾಲಿ? ಒಂದು ಕರವಸ್ತ್ರವನ್ನೂ ನಿನಗೆ ಆಚೆಗೆ ಎಸೆಯಲಾಗಲಿಲ್ಲ? ನೋಡು ನಾನು ಎಸೆಯುತ್ತೇನೆ ಎಂದು ಕರವಸ್ತ್ರದಲ್ಲಿ ಒಂದು ಸಣ್ಣ ಕಲ್ಲನ್ನು ಸೇರಿಸಿ ಅದನ್ನು ಸುತ್ತಿ ಗೋಡೆಯಿಂದಾಚೆ ಎಸೆದು ಬಿಟ್ಟ. ಪೈಲ್ವಾನ ಬೆಕ್ಕಸ ಬೆರಗಾಗಿ ನೋಡುತ್ತಾ ನಿಂತ!

## ೧೨. ನೆರವಿನ ಸ್ಮರಣೆ

ಯಾವುದರ ಬಗ್ಗೆಯೋ ತಲೆಕೆಡಿಸಿಕೊಂಡು ನಸಿರುದ್ದೀನ್ ಕೆರೆಯ ದಂಡೆಯ ಮೇಲೆ ಹೋಗುತ್ತಿದ್ದ. ಹಿಂದಿನ ದಿನ ಮಳೆಯಾದ್ದರಿಂದ ದಾರಿ ಜಾರಿಕೆಯದಾಗಿತ್ತು. ಇನ್ನೇನು ಜಾರಿ ಬೀಳಲಿದ್ದ ನಸಿರುದ್ದೀನನನ್ನು ಪ್ರಯಾಣಿಕನೊಬ್ಬ ಹಿಡಿದು ನಿಲ್ಲಿಸಿದ. ಅದಕ್ಕೆ

ನಸಿರುದ್ದೀನ ಕೃತಜ್ಞತೆ ಹೇಳಿದ. ಆದರೆ ಆ ಪ್ರಯಾಣಿಕ ತಾನು ಮಾಡಿದ ಉಪಕಾರವನ್ನು ಊರಲ್ಲೆಲ್ಲಾ ಹೇಳಿಕೊಂಡು ತಿರುಗಹತ್ತಿದ. ಮತ್ತು ನಸಿರುದ್ದೀನ್ ಸಿಕ್ಕಾಗಲೂ ಪದೇ ಪದೇ ತಾನು ಮಾಡಿದ ಉಪಕಾರವನ್ನು ನೆನಪಿಸುತ್ತಿದ್ದ.



ಇದನ್ನು ಕಂಡು ನಸಿರುದ್ದೀನನಿಗೆ ರೋಸಿ ಹೋಯಿತು. ಅವನ ಕೈ ಹಿಡಿದೆಳೆದುಕೊಂಡು ಅದೇ ಕೆರೆಯ ಬಳಿ ಹೋಗಿ, ಅವನನ್ನು ದಡದಲ್ಲಿ ನಿಲ್ಲಿಸಿ ತಾನು ಕೆರೆಗೆ ಧುಮುಕಿದ. ಮತ್ತು "ನೋಡಪ್ಪಾ, ನೀನು ಆ ದಿನ ನನ್ನನ್ನು ಕಾಪಾಡದಿದ್ದರೆ ಕೆರೆಗೆ ಬಿದ್ದು ನಾನು ಎಷ್ಟು

ನೆನೆಯಬಹುದಿತ್ತೋ ಅಷ್ಟು ನೆನೆದಿದ್ದೇನೆ. ದಯವಿಟ್ಟು ನಿನ್ನ ಉಪಕಾರವನ್ನು ಪುನಃ ಪುನಃ ನೆನಪಿಸಬೇಡ ಎಂದ."

ಪ್ರಯಾಣಿಕ ಅವಾಕ್ಕಾಗಿ ನಿಂತ!

## ೧೩. ಅಧಿಕಾರಿಯ ಧಿಮಾಕು

ನಸಿರುದ್ದೀನನ ಸ್ನೇಹಿತನೊಬ್ಬ ನಗರದಲ್ಲಿ ಉನ್ನತ ಹುದ್ದೆಗೇರಿದ. ತನ್ನ ಸ್ನೇಹಿತನಿಗೆ ದೊಡ್ಡ ಕೆಲಸ ಸಿಕ್ಕಿದುದನ್ನು ಕಂಡು ನಸಿರುದ್ದೀನನಿಗೆ ಸಂತೋಷವಾಯಿತು. ಅವನನ್ನು ಕಂಡು ಬರಲು ಹೊರಟ.



ಆದರೆ ಆ ಸ್ನೇಹಿತನಿಗೆ ಅಧಿಕಾರದ ಮದ ಏರಿತ್ತು. ನಸಿರುದ್ದೀನನನ್ನು ಕಂಡೂ ಕಾಣದಂತೆ ಕುಳಿತಿದ್ದ. ಕೊನೆಗೆ ಯಾರು ನೀನು? ನಿನಗೆ ಏನು ಬೇಕಿತ್ತು? ಎಂದು ದೊಡ್ಡ ದನಿಯಲ್ಲಿ ಕೇಳಿದ.

ತನ್ನ ಸ್ನೇಹಿತನಿಗೆ ದೊಡ್ಡ ಹುದ್ದೆಯ ಮದ ಏರಿರುವುದು ನಸಿರುದ್ದೀನನಿಗೆ ಗೊತ್ತಾಯಿತು. ಅದನ್ನು ಇಳಿಸಲೆಂದೇ ಆತ"ಅಪ್ಪಾ, ನಾನು ನಿನ್ನ ಬಾಲ್ಯ ಸ್ನೇಹಿತ ನಸಿರುದ್ದೀನ್. ನೀನು ಉನ್ನತ ಹುದ್ದೆಗೇರಿದ್ದು ಗೊತ್ತಾಯಿತು. ಆದ್ದರಿಂದ ನಿನ್ನನ್ನು ಕಾಣಲೆಂದೇ ಬಂದೆ. ಆದರೆ ನಿನಗೆ ಈ ವಯಸ್ಸಿನಲ್ಲಿಯೇ ಕಣ್ಣು ಕಾಣುವುದಿಲ್ಲ. ಕಿವಿ ಕೇಳುವುದಿಲ್ಲ ಎಂದು ತಿಳಿಯಿತು. ಬಾ ನನಗೆ ಒಳ್ಳೆಯ ಹಕೀಮರು ಪರಿಚಯ ಇದ್ದಾರೆ. ತೋರಿಸಿಕೊಂಡು ಬರೋಣ" ಅಂದ.

ಅಧಿಕಾರಿಯ ಮದ ಇಳಿದು ಹೋಯಿತು.

### ೧೪. ಎದೆ ಉರಿತ

ಒಬ್ಬ ಜಿಪುಣನ ಮನೆಗೆ ನಸಿರುದ್ದೀನ್ ಹೋದ. ಆತ ಇವನಿಗೆ ಊಟ ಹಾಕಿದರೆ ಖರ್ಚು ಹೆಚ್ಚಾಗುವುದೆಂದು ಕೇವಲ ರೊಟ್ಟಿ ಜೇನುತುಪ್ಪ ನೀಡಿ ಸಾಗಹಾಕಲು ಯೋಚಿಸಿದ. ಮೊದಲು ಜೇನುತುಪ್ಪದ ಬಟ್ಟಲು ತಂದಿರಿಸಿದ. ರೊಟ್ಟಿ ತರಬೇಕೆಂದು ಒಳ ಹೋಗುವಷ್ಟರಲ್ಲಿ, ನಸಿರುದ್ದೀನ್ ಜೇನುತುಪ್ಪವನ್ನು ನೆಕ್ಕುತ್ತಿರುವುದನ್ನು ಗಮನಿಸಿದ.

ರೊಟ್ಟಿ ತರುವಷ್ಟರಲ್ಲಿ ಜೇನುತುಪ್ಪವನ್ನೆಲ್ಲಾ ತಿಂದು ಬಿಟ್ಟರೆ ಎಂದು ಆತಂಕವಾಯಿತು. ಅದಕ್ಕೆ "ಇರು ನಸೀರ್, ರೊಟ್ಟಿ ತಂದು ಬಿಡುತ್ತೇನೆ. ಬರೀ ಜೇನುತುಪ್ಪ ತಿಂದರೆ ಹೊಟ್ಟೆ ಉರಿಯುತ್ತೆ ಗೊತ್ತಾ?" ಎಂದ.

"ಯಾರ ಹೊಟ್ಟೆ ಉರಿಯುತ್ತದೆಂದು ಆ ದೇವರಿಗೇ ಗೊತ್ತು" ಎಂದ ನಸೀರ್, ಮತ್ತೊಮ್ಮೆ ಬಟ್ಟಲಿಗೆ ಕೈ ಹಾಕಿದ.

## ೧೫. ಬಾದಾಮಿಕಾಯಿ

ನಸಿರುದ್ದೀನನ ಮಗನಿಗೆ ಒಂದು ಬಾದಾಮಿಕಾಯಿ ಸಿಕ್ಕಿತು. ಅದನ್ನು ಕಲ್ಲು ಬಂಡೆಯ ಮೇಲಿಟ್ಟು ಗುಂಡು ಕಲ್ಲಿನಿಂದ ಏಟು ಹಾಕಿದ. ಆದರೆ ಆ ಕಾಯಿ ಎಗರಿ ಬಿಟ್ಟಿತು. ಹತಾಶನಾಗಿ ತಂದೆಗೆ ಈ ವಿಷಯ ಹೇಳಿದ. ಮಗನ ಮಾತನ್ನು ಕೇಳಿಸಿಕೊಂಡ ನಸಿರುದ್ದೀನ್, "ಪ್ರಪಂಚವೇ ಹೀಗಪ್ಪಾ, ಪ್ರೇಮದಿಂದ ಕರೆದರೆ ಎಲ್ಲರೂ ಹತ್ತಿರಕ್ಕೆ ಬರುತ್ತಾರೆ. ಹೊಡೆದರೆ ಓಡಿ ಹೋಗುತ್ತಾರೆ. ನೀನು ಅದರ ತಲೆ ಒಡೆಯಲು ಪ್ರಯತ್ನಿಸಿದೆ. ಅದಕ್ಕೆ ಬಾದಾಮಿಕಾಯಿ ಓಡಿ ಹೋಯಿತು" ಎಂದ.

## ೧೬. ನ್ಯಾಯಾಲಯಕ್ಕೆ ಭೇಟಿ

ನಸಿರುದ್ದೀನ್ ಒಮ್ಮೆ ರಸ್ತೆಯಲ್ಲಿ ಯಾರೊಂದಿಗೋ ಜೋರಾಗಿ ಜಗಳವಾಡಿದ. ಅದನ್ನು ಕಂಡ ಭಟರು ಅವನನ್ನು ನ್ಯಾಯಾಸ್ಥಾನಕ್ಕೆ ಎಳೆದೊಯ್ದರು.

ಅಲ್ಲಿನ ನ್ಯಾಯಾಧೀಶನಿಗೆ, ಹಿಂದೊಮ್ಮೆ ನಸಿರುದ್ದೀನ್ ನ್ಯಾಯಾಲಯಕ್ಕೆ ಬಂದಿದ್ದು ನೆನಪಾಯಿತು."ಏನಯ್ಯಾ, ಎರಡನೇ ಬಾರಿ ನ್ಯಾಯಾಲಯಕ್ಕೆ ಬರುತ್ತಿದ್ದೀಯಲ್ಲ ನಾಚಿಕೆಯಾಗುವುದಿಲ್ಲವೇ?" ಎಂದು ಕೇಳಿದ.

ಹೌದು ಸ್ವಾಮಿ, ಎರಡನೇ ಬಾರಿಗೆ ಬಂದುದಕ್ಕೇ ನನಗೆ ನಾಚಿಕೆಯೆನಿಸುತ್ತದೆ. ಆದರೆ ನೀವು ದಿನನಿತ್ಯ ಬರುತ್ತಿದ್ದೀರಲ್ಲ?" ಎಂದ.



## ೧೭. ನಸಿರುದ್ದೀನ ಮತ್ತು ಲಾಟೀನು

ಒಮ್ಮೆ ರಾತ್ರಿ ಹೊತ್ತಿನಲ್ಲಿ ಒಳ್ಳೆಯ ಬಟ್ಟೆ ಧರಿಸಿ, ಲಾಟೀನು ಹಿಡಿದುಕೊಂಡು ಹೊರಟ ನಸಿರುದ್ದೀನನನ್ನು ಅವನ ತಂದೆ "ಎಲ್ಲಿಗೆ ಹೋಗುತ್ತಿದ್ದೀಯಾ?" ಎಂದು ಕೇಳಿದರು.

"ನಾನು ಮದುವೆಯಾಗಲಿರುವ ಹುಡುಗಿಯನ್ನು ನೋಡಲು ಹೊರಟಿದ್ದೇನೆ" ಎಂದ ನಸೀರುದ್ದೀನ್.

"ನಾನು ಮದುವೆಯಾಗಲಿದ್ದ ಹುಡುಗಿಯನ್ನು ನೋಡಲು ಹೊರಟಾಗ ಲಾಟೀನು ತೆಗೆದುಕೊಂಡು ಹೋಗಿರಲಿಲ್ಲ. ಕತ್ತಲಲ್ಲಿ ಹಾಗೇ ನಡೆದುಕೊಂಡು ಹೋಗಿದ್ದೆ" ಎಂದ ಅವನ ತಂದೆ ಜಂಬದಿಂದ.

"ಅದಕ್ಕೆ ನಿನಗೆ ಆದಂತೆ ನನಗೂ ಆಗದಿರಲಿ" ಎಂದೇ ಲಾಟೀನು ಒಯ್ಯುತ್ತಿದ್ದೇನೆ" ಎಂದ ನಸೀರುದ್ದೀನ್.

## ೧೮. ಚಿಕಿತ್ಸೆ

ಒಮ್ಮೆ ನಸಿರುದ್ದೀನನಿಗೆ ಕಾಯಿಲೆಯಾಯಿತು. ಅವನ ಹೆಂಡತಿ ಹಕೀಮನ ಬಳಿ ಬಂದು ಔಷಧಿ ನೀಡುವಂತೆ ಕೇಳಿಕೊಂಡಳು. ಆದರೆ ಹಣವಿಲ್ಲದೆ ಮನೆಗೆ ಬರಲು ಹಕೀಮ ನಿರಾಕರಿಸಿದ.



ಹೇಗೋ ಕಾಯಿಲೆಯಿಂದ ಚೇತರಿಸಿಕೊಂಡ ನಸಿರುದ್ದೀನನಿಗೆ ಅದೇ ಹಕೀಮ ಎದುರಾದ. ನಸಿರುದ್ದೀನನನ್ನು ಕಂಡು "ಆ ದಿನ ಅವಸರದ ಕೆಲಸವಿದ್ದುದರಿಂದ ಬರಲಾಗಲಿಲ್ಲ" ಎಂದ."ಛೇ ... ಛೇ.... ಎಂತಹ ಮಾತು. ನಿಮಗೆ ಋಣಿಯಾಗಿದ್ದೇನೆ ಸ್ವಾಮಿ" ಎಂದ ನಸೀರುದ್ದೀನ್.

"ನಾನು ಔಷಧಿಯನ್ನೇ ನೀಡಲಿಲ್ಲ. ಅದೇಕೆ ನೀವು ನನಗೆ ಋಣಿಯಾಗಿದ್ದೀರಿ" ಎಂದು ಹಕೀಮ ಕೇಳಿದ.

"ನೀವು ಔಷಧಿ ನೀಡದೆ ಇದ್ದುದರಿಂದಲೇ ಬದುಕಿ ಉಳಿದಿದ್ದೇನೆ ಸ್ವಾಮಿ" ಎಂದ ನಸೀರುದ್ದೀನ್.

## ೧೯. ನಸಿರುದ್ದೀನ್ ಮತ್ತು ಚಕ್ರವರ್ತಿ ಪಟ್ಟ

ಒಂದು ದಿನ ಬಾದಶಹ ನಸಿರುದ್ದೀನನನ್ನು ಕೇಳಿದ. "ನಿಜ ಹೇಳು ನಸೀರ್, ನಿನಗೆ ಬಾದಶಹನಾಗಬೇಕೆಂಬ ಆಶೆ ಇದೆಯೇ?"

"ಇಲ್ಲ ಸ್ವಾಮಿ, ಬಾದಶಹನಾಗುವುದು ನನ್ನ ಶತ್ರುವಿಗೂ ಬೇಡ"ಎಂದ.

"ಏಕೆ?" ಎಂದ ಬಾದಶಹ ಅಚ್ಚರಿಯಿಂದ.

ನನ್ನ ಜೀವನದಲ್ಲಿ ಇದುವರೆಗೆ ಇಬ್ಬರು ಬಾದಶಹರ ದುರ್ಮರಣವನ್ನು ನೋಡಿದ್ದೇನೆ. ದೇವರ ದಯೆ ಇದ್ದರೆ ಇನ್ನೆಷ್ಟು ನೋಡಬಹುದೋ?" ಆದರೆ ಆ ಬಾದಶಹರುಗಳು ಯಾರಾದರೂ ನನ್ನ ಮರಣವನ್ನು ನೋಡಿದ್ದಾರೆಯೇ? ಎಂದ"

ಬಾದಶಹ ತೆಪ್ಪಗಾದ.

## ೨೦. ಗೋಣಿಚೀಲದ ಕಳ್ಳತನ

ನಸಿರುದ್ದೀನ್ ಸಾಮಾನುಕೊಳ್ಳಲು ಅಂಗಡಿಗೆ ಹೋಗಿದ್ದ. ಅಂಗಡಿಯ ಬಳಿ ತುಂಬಾ ನೂಕು ನುಗ್ಗಲು ಇತ್ತು. ಯಾರೋ ಒಬ್ಬ



ನಸಿರುದ್ದೀನನ ಗೋಣಿ ಚೀಲವನ್ನು ಕದ್ದ. ಕೋಪಗೊಂಡ ನಸಿರುದ್ದೀನ್ "ನನ್ನ ಚೀಲವನ್ನು ಕದ್ದವನು ಕೂಡಲೇ ಹಿಂದಿರುಗಿಸಬೇಕು, ಇಲ್ಲದಿದ್ದರೆ ಹಿಂದೊಮ್ಮೆ ಕಳೆದಾಗ ಮಾಡಿದಂತೆಯೇ ಮಾಡುತ್ತೇನೆ" ಎಂದು ಜೋರಾಗಿ ಅರಚಿದ.

ಹೆದರಿದ ಕಳ್ಳ ಎಲ್ಲಿಂದಲೋ ಚೀಲವನ್ನು ಎಸೆದು ಹೋದ. ಅದನ್ನು ಕಂಡ ಅಂಗಡಿಯವ ಹಿಂದೆ ಕಳ್ಳತನವಾದಾಗ ಏನು ಮಾಡಿದ್ದಿರಿ?" ಎಂದು ಕೇಳಿದ.

ಮಾಡಿದ್ದೇನು? "ಸುಮ್ಮನಿದ್ದೆ" ಅಷ್ಟೆ ಎಂದು ತಣ್ಣಗೆ ಹೇಳಿದ ನಸಿರುದ್ದೀನ್.

## ೨೧. ಯಾರಿಗೆ ಬೇಕು ಉಪದೇಶ ?

ನಸಿರುದ್ದೀನನಿಗೆ ಜನರ ಗುಂಪಿಗೆ ಉಪದೇಶ ಮಾಡುವುದು ಎಂದರೇ ಆಗುತ್ತಿರಲಿಲ್ಲ. ಆದರೂ ಜನರ ಗುಂಪೊಂದು ಅವನಿಂದ ಉಪದೇಶ ಪಡೆಯುವುದಕ್ಕಾಗಿ ಬಲವಂತವಾಗಿ ಒಪ್ಪಿಸಿಕೊಂಡು ಕರೆದುಕೊಂಡು ಹೋಯಿತು. ಮಸೀದಿಯ ಮೇಲೆ ಹತ್ತಿದ ನಸಿರುದ್ದೀನ್,

"ಮಹಾಜನಗಳೇ ಜಗತ್ತಿನಲ್ಲಿ ಏನು ನಡೆಯುತ್ತಿದೆ ಎಂಬುದು ನಿಮಗೆ ಗೊತ್ತೇ ?" ಎಂದ.

"ಗೊತ್ತಿಲ್ಲ"ಎಂದು ಜನ ಒಕ್ಕೊರಲಿನಿಂದ ಹೇಳಿದರು.

ಗೊತ್ತಿಲ್ಲದವರಿಗೆ ಏನು ಹೇಳಿ ಏನು ಪ್ರಯೋಜನ ಎಂದು ಇಳಿದು ಹೋದ.



ಜನರಿಗೆ ಬೇಸರವಾಯಿತು. ಮತ್ತೊಮ್ಮೆ ಅವನನ್ನು ಬಲವಂತವಾಗಿ ಕರೆದುಕೊಂಡು ಬಂದು ಮಿನಾರ ಅನ್ನು ಹತ್ತಿಸಿದರು.

"ಮಹಾಜನಗಳೇ, ಜಗತ್ತಿನಲ್ಲಿ ಏನು ನಡೆಯುತ್ತಿದೆ ಎಂಬುದು ನಿಮಗೆ ಗೊತ್ತೇ" ಎಂದು ಪುನಃ ಕೇಳಿದ. ಮೊದಲಿನ ಅನುಭವ ಇದ್ದ ಜನರೆಲ್ಲಾ ಒಕ್ಕೊರಲಿನಿಂದ "ಗೊತ್ತು, ಗೊತ್ತು" ಎಂದರು.

"ಗೊತ್ತಿದ್ದವರಿಗೆ ಮತ್ತೆ ಏಕೆ ಹೇಳಬೇಕು" ಎಂದು ಮಿನಾರಿನಿಂದ ಇಳಿದು ಹೋದ.

ಆದರೂ ಜನ ಬಿಡಲಿಲ್ಲ. ಮತ್ತೆ ನಸಿರುದ್ದೀನನ ಮನಸ್ಸನ್ನು ಒಲಿಸಿ ಕರೆದುಕೊಂಡು ಬಂದರು. ಇನ್ನೂ ಹೆಚ್ಚು ಜನ ಸೇರಿದ್ದರು. ನಸಿರುದ್ದೀನ್ ಏನಾದರೂ ಕೇಳಿದರೆ ಏನು ಹೇಳಬೇಕು ಎಂದು ತಿರ್ಮಾನಿಸಿಕೊಂಡಿದ್ದರು. ನಸಿರುದ್ದೀನ ಭಾಷಣ ಆರಂಭಿಸಿದ.

"ಮಹಾಜನಗಳೇ, ಜಗತ್ತಿನಲ್ಲಿ ಏನಾಗುತ್ತಿದೆಯೆಂಬುದು ನಿಮಗೆ ತಿಳಿದಿದೆಯೇ" ಎಂದು ಪುನಃ ಅದೇ ವಾಕ್ಯವನ್ನು ಕೇಳಿದ. ಸೇರಿದ್ದ ಜನರು ಮೊದಲೇ ಮಾತಾಡಿಕೊಂಡಿದ್ದಂತೆ, ಅರ್ಧ ಜನ "ಗೊತ್ತಿದೆ"ಎಂದರು. ಉಳಿದವರು "ಗೊತ್ತಿಲ್ಲ" ಎಂದರು."ಹಾಗಾದರೆ ಗೊತ್ತಿರುವವರು ಗೊತ್ತಿಲ್ಲದವರಿಗೆ ಹೇಳಿ" ಎಂದು ನುಡಿದು ಮಿನಾರಿನಿಂದ ಕೆಳಗಿಳಿದು ಹೋದ ನಸಿರುದ್ದೀನ್.





* * *

ಕನ್ನಡ ವಿಶ್ವವಿ ... ಟ್ಟದವರೆಗೆ ಉತ್ತಮ
ಹಾಗೂ ಉಪ ... 'ಪಠ್ಯಪುಸ್ತಕ ರಚನಾ
ವಿಭಾಗ'ವನ್ನು ... ಪಠ್ಯಪುಸ್ತಕ ರಚನೆ
ಮಾಡಬೇಕೆಂ ... ಖೆ ನವಸಾಕ್ಷರರಿಗಾಗಿ
ಪುಸ್ತಕ ಬರೆಸ ... ಯಕ್ಕೆ ವಹಿಸಿಕೊಟ್ಟರು.
ವಿಶ್ವವಿದ್ಯಾಲ ... ಪ್ರಖ್ಯಾತ ಲೇಖಕರನ್ನು,
ಭಾಷಾತಜ್ಞರನ ... ವರೆಲ್ಲರ ಅಭಿಪ್ರಾಯ,
ಸಲಹೆ, ಸಹಕ ... ಷೆ, ಮುದ್ರಣ ವಿನ್ಯಾಸ,
ಚಿತ್ರಗಳ ಮ ... ಅನೇಕ ಸಲ ಚರ್ಚಿಸಿ
ಯೋಜನೆಯ ...

ನವಸಾಕ್ಷರರಿಗ ... ಗಲೇ ಪ್ರಕಟವಾಗಿರುವ
ಪುಸ್ತಕಗಳನ್ನೆ ... ಲ್ಲ ಭಾಷಾತಜ್ಞರಿಂದ
ಪರಿಶೀಲಿಸಲಾ ... ೇಮಿಸಿಕೊಂಡು ಅವರಿಗೆ
ಕಮ್ಮಟಗಳನ್ನು ನಡೆಸಿ, ಪ್ರಶ್ನಾವಳಿ ತಯಾರಿಸಿಕೊಟ್ಟು, ಅವರನ್ನು ರಾಜ್ಯದಾದ್ಯಂತ ಆಯ್ದ ಜಿಲ್ಲೆ, ತಾಲೂಕುಗಳಿಗೆ ಕಳುಹಿಸಿ ಈ ಆಂದೋಲನದಲ್ಲಿ ಕಲಿತವರಿಂದ ಮತ್ತು ಕಲಿಯುತ್ತಿರುವವರಿಂದ ಅದರ ಗುಣದೋಷಗಳ ಬಗ್ಗೆ ಅಭಿಪ್ರಾಯ ಸಲಹೆಗಳನ್ನು ಸಂಗ್ರಹಿಸಿ, ಅನಂತರ ಅವುಗಳನ್ನೆಲ್ಲ ವಿಶ್ವವಿದ್ಯಾಲಯದ ಗಣಕಯಂತ್ರದಲ್ಲಿ ವಿಶ್ಲೇಷಿಸಲಾಯಿತು; ಮತ್ತೆ ಮತ್ತೆ ಕ್ಷೇತ್ರಗಳಿಗೆ ಹೋಗಿ, ಕ್ಷೇತ್ರ ಸಹಾಯಕರು ನೀಡಿದ್ದ ಮಾಹಿತಿಗಳನ್ನೆಲ್ಲ ಮರು ಪರಿಶೀಲನೆ ಮಾಡಿ, ನಂತರ ನವಸಾಕ್ಷರರ ಅಪೇಕ್ಷೆಗೆ ಅನುಗುಣವಾಗಿ ವಿಷಯದ ಆದ್ಯತೆಗಳನ್ನು ನಿರ್ಧರಿಸಿಕೊಂಡು ಪುಸ್ತಕ ರಚನೆಗೆ ತೊಡಗಲಾಯಿತು; ಪ್ರಖ್ಯಾತ ಲೇಖಕರು ನಮ್ಮ ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಜೊತೆ ಚರ್ಚಿಸಿ ತಮ್ಮ ಹಸ್ತಪ್ರತಿಗಳಿಗೆ ಅಂತಿಮ ರೂಪ ಕೊಟ್ಟರು. ಕಲಾವಿದರು ವಿಷಯಗಳಿಗೊಪ್ಪುವ ಚಿತ್ರಗಳನ್ನು ಬರೆದುಕೊಟ್ಟರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳನ್ನು ನವಸಾಕ್ಷರರ ಬಳಿ ಕೊಂಡೊಯ್ದು ಅವರ ಮುಂದೆ ಪಠಿಸಿ ನಂತರ ಅವರ ಅಭಿಪ್ರಾಯ, ಪ್ರತಿಕ್ರಿಯೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ಅಂತಿಮಗೊಳಿಸಲಾಯಿತು.

---

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

---